## ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 128 |
| ಸದಸ್ಯರ ಹೆಸರು | : | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 08.12.2020 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ನಗರಾಭಿವೃದ್ಧಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| 1 | ರಾಜ್ಯದ ಮಹಾನಗರಪಾಲಿಕೆಗಳಲ್ಲಿ ಖಾಯಂ ಹಾಗೂ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಸುತ್ತಿರುವ ಪೌರಕಾರ್ಮಿಕರ ಸಂಖ್ಯೆ ಎಷ್ಟು; (ವಿವರ ನೀಡುವುದು) | ರಾಜ್ಯದ 10 ಮಹಾನಗರಪಾಲಿಕೆಗಳಲ್ಲಿ (ಬಿಬಿಎಂಪಿ ಹೊರತುಪಡಿಸಿ) ಕರ್ತವ್ಯ ನಿರ್ವಹಿಸುತ್ತಿರುವ ಖಾಯಂ ಪೌರ ಕಾರ್ಮಿಕರ ಸಂಖ್ಯೆ 2468 ಮತ್ತು ಗುತ್ತಿಗೆ ಪೌರ ಕಾರ್ಮಿಕರ ಸಂಖ್ಯೆ 4849. |
| 2 | ಸದರಿಯವರಿಗೆ ಮಾಸಿಕ ನೀಡಲಾಗುತ್ತಿರುವ ವೇತನ ಮತ್ತು ಇನ್ನಿತರೆ ಸೌಲಭ್ಯಗಳಾವುವು;(ವಿವರ ನೀಡುವುದು) | ರಾಜ್ಯದ ಮಹಾನಗರಪಾಲಿಕೆಗಳಲ್ಲಿ (ಬಿಬಿಎಂಪಿ ಹೊರತುಪಡಿಸಿ) ಕಾರ್ಯ ನಿರ್ವಹಿಸುತ್ತಿರುವ ಖಾಯಂ ಪೌರಕಾರ್ಮಿಕರುಗಳಿಗೆ ಅವರ ವೇತನ ಶ್ರೇಣಿಗೆ (ರೂ.17,000-28,950) ಅನುಗುಣವಾಗಿ ಪೌರಕಾರ್ಮಿಕರುಗಳ ಖಾತೆಗೆ ಜಮಾ ಮಾಡಲಾಗುತ್ತದೆ. ಹೊರಗುತ್ತಿಗೆ ಪೌರಕಾರ್ಮಿಕರಿಗೆ ಕಾರ್ಮಿಕ ಇಲಾಖೆಯು ನಿಗಧಿಪಡಿಸಿರುವ ಮೂಲ ವೇತನ + VDA ಸೇರಿ + ಇಎಸ್ಐ+ ಪಿ.ಎಫ್ ಮೊತ್ತವನ್ನು ಸೇರಿಸಿ ಮಾಸಿಕ ವೇತನವನ್ನು ಪಾವತಿಸಲಾಗುತ್ತಿದೆ. ಜೊತೆಗೆ ಇನ್ನಿತರೆ ಸೌಲಭ್ಯಗಳಾದ ಜೀವನಾಧಾರ, ಸಾಮಾಜಿಕ ಭದ್ರತೆ, ಆರೋಗ್ಯ ಸುರಕ್ಷತೆ ಹಾಗೂ ಅವರ ಅವಲಂಬಿತರ ಕಲ್ಯಾಣಕ್ಕಾಗಿ ಈ ಕೆಳಕಂಡಂತೆ ಕ್ರಮವಹಿಸಲಾಗಿರುತ್ತದೆ:-<br>• ರಾಜ್ಯದ ಘನತ್ಯಾಜ್ಯ ನಿರ್ವಹಣೆ ಮತ್ತು ನಗರ ನೈರ್ಮಲ್ಯಕ್ಕೆ ಸಂಬಂಧಿಸಿದ ಸ್ವಚ್ಛತಾ ಕೆಲಸಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪೌರ ಕಾರ್ಮಿಕರಿಗೆ ಕಾರ್ಮಿಕ ಇಲಾಖೆಯು ನಿಗಧಿಪಡಿಸುವ ಕನಿಷ್ಠ ವೇತನ ಜೊತೆಗೆ ಚಾಲ್ತಿಯಲ್ಲಿರುವ ಪಿ.ಎಫ್., ಇ.ಎಸ್.ಐ. ಗಳನ್ನು ಮಾಸಿಕವಾಗಿ ಪಾವತಿಸಲು ತಿಳಿಸಿದ್ದು, ಪಾವತಿಯಾಗುತ್ತಿರುವ ಬಗ್ಗೆ ಖಚಿತಪಡಿಸಿಕೊಳ್ಳಲಾಗಿರುತ್ತದೆ ಹಾಗೂ ಮಾಸಿಕ ವೇತನವನ್ನು RTGS ಮೂಲಕ ಪಾವತಿಸಲು ಸೂಚಿಸಲಾಗಿರುತ್ತದೆ.<br>• ರಾಜ್ಯದಲ್ಲಿ ಅನ್ನೈರ್ಮಲ್ಯ ವಾತಾವರಣದಲ್ಲಿ ಕಾರ್ಯನಿರ್ವಹಿಸುತ್ತಿರುವ ಖಾಯಂ ವಸತಿ ರಹಿತ ಪೌರ ಕಾರ್ಮಿಕರು, ಲೋಡರ್ಸ್, ಯುಜಿಡಿ, ಹೆಲ್ಪರ್ಸ್ ಹಾಗೂ ಮೇಸ್ತ್ರಿಗಳಿಗೆ ವಸತಿ ಕಲ್ಪಿಸುವ ಉದ್ದೇಶದಿಂದ "ಪೌರ ಕಾರ್ಮಿಕರ ಗೃಹಭಾಗ್ಯ ಯೋಜನೆ"ಯನ್ನು 2014-15ರಲ್ಲಿ ಜಾರಿಗೊಳಿಸಿದೆ. |

| | | |
|---|---|---|
| | | ಈ ಯೋಜನೆಯಡಿ ಪ್ರತಿ ಮನೆಗೆ 7.50 ಲಕ್ಷಗಳ ಸಹಾಯ ಧನ ಒದಗಿಸಲಾಗಿದೆ. ಅದರಲ್ಲಿ 6 ಲಕ್ಷಗಳನ್ನು ರಾಜ್ಯ ಸರ್ಕಾರ ಮತ್ತು 1.50 ಲಕ್ಷಗಳನ್ನು ಕೇಂದ್ರ ಸರ್ಕಾರದ PMAY ಯೋಜನೆಯಡಿ ಭರಿಸಲಾಗುವುದು. ಉಳಿದಂತೆ ಹೆಚ್ಚುವರಿ ವೆಚ್ಚವನ್ನು ಫಲಾನುಭವಿಗಳು ಅಥವಾ ಮಹಾನಗರಪಾಲಿಕೆಗಳು ಭರಿಸಬೇಕಾಗುತ್ತದೆ.<br>• ಪೌರಕಾರ್ಮಿಕರ ಸುರಕ್ಷತೆಗಾಗಿ ಸುರಕ್ಷಾ ಧಿರಿಸುಗಳಾದ ಗಮ್ ಬೂಟ್ಸ್, ಕೈಕವಚ, ಸಮವಸ್ತ್ರ, ರೈನ್ ಕೋಟ್, ಕ್ಯಾಪ್, ಫೇಸ್ ಮಾಸ್ಕ್ ಹಾಗೂ ಇತರೆ ಧಿರಿಸುಗಳನ್ನು ನೀಡಲಾಗುತ್ತಿದೆ.<br>• ಸರ್ಕಾರದ ಆದೇಶ ಸಂಖ್ಯೆ:ನಅಇ 92 ಟಿಸಿಎಂ 2012 ದಿನಾಂಕ:16.1.2016ರ ರೀತ್ಯಾ ಹೊರಗುತ್ತಿಗೆ ಪೌರಕಾರ್ಮಿಕರಿಗೆ ದಿನನಿತ್ಯ ಬೆಳಗಿನ ಉಪಹಾರ ನೀಡಲು ಸೂಚನೆ ನೀಡಲಾಗಿದೆ.<br>• ಹೊರಗುತ್ತಿಗೆ ಪೌರಕಾರ್ಮಿಕರ ಆರೋಗ್ಯ ಸುರಕ್ಷತೆ ಹಾಗೂ ಸಾಮಾಜಿಕ ಭದ್ರತೆಗೆ ಸರ್ಕಾರದ ಆರೋಗ್ಯ ವಿಮೆ ಯೋಜನೆಯಡಿ ತರಲು ಎಲ್ಲಾ ನಗರಸ್ಥಳೀಯ ಸಂಸ್ಥೆಗಳ ಆಯವ್ಯಯದಡಿ ಅಗತ್ಯವಿರುವ ಮೊತ್ತವನ್ನು ಅಳವಡಿಸಿಕೊಳ್ಳುವಂತೆ ಸೂಚನೆ ನೀಡಲಾಗಿದೆ. ಜೊತೆಗೆ ಮೂರು ತಿಂಗಳಿಗೊಮ್ಮೆ ನಿಯತಕಾಲಿಕವಾದ ವೈದ್ಯಕೀಯ ತಪಾಸಣೆಯನ್ನು ಮಾಡಿಸಲು ಸೂಚನೆ ನೀಡಲಾಗಿರುತ್ತದೆ.<br>• ಪ್ರತಿ ವರ್ಷ 23ನೇ ಸೆಪ್ಟೆಂಬರ್ ಅಥವಾ 22ನೇ ಫೆಬ್ರುವರಿ ರಂದು ಪೌರಕಾರ್ಮಿಕರ ದಿನಾಚರಣೆ ಆಚರಿಸಲು ಸೂಚನೆ ನೀಡಲಾಗಿದೆ.<br>• ಪೌರಕಾರ್ಮಿಕರ ಮಕ್ಕಳಿಗೆ ಶೇ.24.10ರ ಯೋಜನೆಯಲ್ಲಿ ಶೇ.20%ರಷ್ಟು ಮೊತ್ತವನ್ನು ಪೌರಕಾರ್ಮಿಕರ ಕಲ್ಯಾಣಕ್ಕಾಗಿ (ಮಕ್ಕಳ ಉನ್ನತ ವಿದ್ಯಭ್ಯಾಸಕ್ಕಾಗಿ ಸಹಾಯಧನ ಕೌಶಲ್ಯ ಅಭಿವೃದ್ಧಿ ತರಬೇತಿ ಇತರೆ) ಮೀಸಲಿಡಲಾಗಿದೆ. |
| 3 | ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಪೌರಕಾರ್ಮಿಕರನ್ನು ಖಾಯಂಗೊಳಿಸಲಾಗುವುದೇ: | ರಾಜ್ಯದ ಮಹಾನಗರಪಾಲಿಕೆಗಳಲ್ಲಿ ಕ್ಷೇಮಾಭಿವೃದ್ಧಿ /ದಿನಗೂಲಿ/ಗುತ್ತಿಗೆ/ಹೊರಗುತ್ತಿಗೆ/ಸಮಾನ ಕೆಲಸಕ್ಕೆ ಸಮಾನ ವೇತನ/ ಇತರೆ ಆಧಾರದ ಮೇಲೆ 2 ವರ್ಷಕ್ಕಿಂತ ಕಡಿಮೆ ಇಲ್ಲದೆ ನಿರಂತರವಾಗಿ ಕೆಲಸ ನಿರ್ವಹಿಸುತ್ತಿರುವವರನ್ನು ಖಾಯಂಗೊಳಿಸುವ ಸಂಬಂಧದಲ್ಲಿ (ಒಂದು ಬಾರಿಗೆ ಮಾತ್ರ) ಅಧಿಸೂಚನೆ ಸಂಖ್ಯೆ:ನಅಇ:129:ಎಂಎನ್ಇ 2017 ದಿನಾಂಕ: 05.12.2017 ರನ್ವಯ ಸರ್ಕಾರ ಹೊರಡಿಸಿರುವ ಅಧಿಸೂಚನೆಯಲ್ಲಿ ನೇಮಕಾತಿಯ ಕುರಿತಂತೆ ನಿಯಮಗಳನ್ನು ರೂಪಿಸಲಾಗಿರುತ್ತದೆ. |

| | | |
|---|---|---|
| | | • ಮೈಸೂರು, ದಾವಣಗೆರೆ, ತುಮಕೂರು, ಬಳ್ಳಾರಿ, ವಿಜಯಪುರ, ಶಿವಮೊಗ್ಗ, ಮಹಾನಗರಪಾಲಿಕೆಗಳಲ್ಲಿ ಪೌರಕಾರ್ಮಿಕರ ನೇರ ನೇಮಕಾತಿಗೆ ಕ್ರಮ ಕೈಗೊಳ್ಳಲಾಗಿರುತ್ತದೆ.<br>• ಕಲಬುರಗಿ ಮತ್ತು ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಗಳಲ್ಲಿ ನೇಮಕಾತಿ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ.<br>• ಮಂಗಳೂರು ಮಹಾನಗರಪಾಲಿಕೆಯಲ್ಲಿ ಪ್ರಸ್ತುತ ಸ್ವಚ್ಛತಾ ಕಾರ್ಯವನ್ನು ಟೆಂಡರ್ ಮುಖಾಂತರ ನಿರ್ವಹಿಸಲಾಗುತ್ತಿದ್ದು, ಸದರಿ ಟೆಂಡರ್ ನ್ನು ದಿನಾಂಕ:22.08.2014 ರಿಂದ 21.08.2021 ರವರೆಗೆ 7 ವರ್ಷದ ಅವಧಿಗೆ ಖಾಸಗಿಯವರಿಗೆ ವಹಿಸಲಾಗಿರುತ್ತದೆ. ಟೆಂಡರ್ ಅವಧಿ ಪೂರ್ಣಗೊಂಡ ನಂತರ ಸರ್ಕಾರದ ಆದೇಶದನ್ವಯ ನೇರ ನೇಮಕಾತಿಗೆ ಕ್ರಮವಹಿಸಲಾಗುತ್ತದೆ.<br>• ಬೆಳಗಾವಿ ಮಹಾನಗರಪಾಲಿಕೆಯಲ್ಲಿ ಖಾಲಿ ಇರುವ ಪೌರಕಾರ್ಮಿಕರನ್ನು ವಿಶೇಷ ನೇರ ನೇಮಕಾತಿಯಡಿ ಭರ್ತಿ ಮಾಡಲು ಜಿಲ್ಲಾಧಿಕಾರಿಗಳು ದಿನಾಂಕ:23.02.2018ರಂದು ಅಧಿಸೂಚನೆ ಹೊರಡಿಸಲಾಗಿದ್ದು, ಅಧಿಸೂಚನೆಗೆ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಮಧ್ಯಂತರ ಆದೇಶ ಹೊರಡಿಸಿದ್ದು, ನ್ಯಾಯಾಲಯದ ಪ್ರಕರಣ ಮುಕ್ತಾಯವಾದ ನಂತರ ಪೌರಕಾರ್ಮಿಕರ ನೇಮಕಾತಿಯನ್ನು ನೇಮಕಾತಿ ಪ್ರಾಧಿಕಾರಿಗಳಾದ ಜಿಲ್ಲಾಧಿಕಾರಿಗಳ ಮೂಲಕ ಕ್ರಮ ವಹಿಸಲಾಗುವುದು. |
| 4 | ಪೌರ ಕಾರ್ಮಿಕರ ಮಕ್ಕಳಿಗೆ ಶಿಕ್ಷಣ ಮತ್ತು ಉದ್ಯೋಗದ ಸಂಬಂಧ ಯಾವ ಯಾವ ಸೌಲಭ್ಯಗಳನ್ನು ಕಲ್ಪಿಸಲಾಗಿದೆ?(ವಿವರ ನೀಡುವುದು) | ಸರ್ಕಾರದ ಸುತ್ತೋಲೆ ಸಂಖ್ಯೆ:ನಅಇ 20 ಪಿಎನ್ ಜಿ 2018, ದಿನಾಂಕ:16-01-2019 ರಲ್ಲಿ ಶೇ.24.10 ಕಲ್ಯಾಣ ಕಾರ್ಯಕ್ರಮದಡಿ ಶೇ.40 ರಷ್ಟು ಅನುದಾನದ ವ್ಯಕ್ತಿ ಸಂಬಂಧಿತ ಸೌಲಭ್ಯಗಳಲ್ಲಿ ಪ್ರಥಮ ಆದ್ಯತೆಯಾಗಿ ಪೌರಕಾರ್ಮಿಕರ ಕುಟುಂಬದವರಿಗೆ ಈ ಕೆಳಕಂಡ ಸೌಲಭ್ಯಗಳನ್ನು ಕಲ್ಪಿಸಲಾಗಿರುತ್ತದೆ.<br><br>**ಶಿಕ್ಷಣ:**<br>• ಎಸ್.ಎಸ್.ಎಲ್.ಸಿ. ಮೇಲ್ಪಟ್ಟು ವಿವಿಧ ಹಂತಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ ಅಥವಾ ವಿದ್ಯಾರ್ಥಿ ವೇತನ ನೀಡಲಾಗುತ್ತದೆ.<br><br>• ಬಿ.ಇ./ಎಂ.ಬಿ.ಬಿ.ಎಸ್. ಓದುತ್ತಿರುವ ವಿದ್ಯಾರ್ಥಿಗಳಿಗೆ ಕಂಪ್ಯೂಟರ್, ಲ್ಯಾಪ್ ಟಾಪ್ ಖರೀದಿಗೆ ಸಹಾಯಧನ ನೀಡಲಾಗುವುದು. |

|  |  |  |
|---|---|---|
|  |  | • ರಾಜ್ಯ ಮತ್ತು ರಾಷ್ಟ್ರಮಟ್ಟದ ಸ್ಪರ್ಧಾತ್ಮಕ ಪರೀಕ್ಷೆಗಳ ಪೂರ್ವಸಿದ್ಧತೆ ತರಬೇತಿಗೆ ಅಧಿಕೃತ ಸಂಸ್ಥೆಗಳಲ್ಲಿನ ಪ್ರವೇಶ ಮತ್ತು ಇತರೆ ಶುಲ್ಕಗಳನ್ನು ಪಾವತಿಸಲಾಗುವುದು.<br>• ವೈದ್ಯ ವೃತ್ತಿ ಮತ್ತು ವಕೀಲ ವೃತ್ತಿ ಪ್ರಾರಂಭಿಸಲು ಪುಸ್ತಕ ಖರೀದಿಗೆ ಸಹಕಾರ.<br>• ರಾಜ್ಯ ರಾಷ್ಟ್ರೀಯ ಮಟ್ಟದ ಕ್ರೀಡೆ/ಕಲೆ/ಸಾಂಸ್ಕೃತಿಕ ಹಾಗೂ ಇತರೆ ವ್ಯಾಸಂಗೇತರ ಚಟುವಟಿಕೆಗಳಲ್ಲಿ ಭಾಗವಹಿಸುವ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ ನೀಡಲಾಗುವುದು.<br><br>**ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ ಕಾರ್ಯಕ್ರಮ:**<br><br>2019-20ನೇ ಸಾಲಿನಿಂದ ಕೇಂದ್ರ ಪುರಸ್ಕೃತ ಕಾರ್ಯಕ್ರಮವಾದ ಅನೈರ್ಮಲ್ಯದ ವೃತ್ತಿಯಲ್ಲಿ ತೊಡಗಿರುವ ಪೋಷಕರ 1ನೇ ತರಗತಿಯಿಂದ 10ನೇ ತರಗತಿಯ ವರೆಗಿನ ಮಕ್ಕಳಿಗೆ ಸಮಾಜ ಕಲ್ಯಾಣ ಇಲಾಖೆಯ ಸಹಯೋಗದೊಂದಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ ಸೌಲಭ್ಯವನ್ನು ಕಲ್ಪಿಸಲಾಗಿದೆ.<br><br>**ಉದ್ಯೋಗ:**<br>• ಸಣ್ಣ ಉದ್ದಿಮೆ ಮತ್ತು ವ್ಯಾಪಾರವನ್ನು ಕೈಗೊಳ್ಳಲು ಇಚ್ಛಿಸುವ ಪೌ ಕಾರ್ಮಿಕರ ಮಕ್ಕಳು ಅಥವಾ ಕುಟುಂಬಸ್ಥರಿಗೆ ಸಣ್ಣ ಉದ್ದಿಮೆದಾರರಿಗೆ ಸಹಾಯ ಧನ ಕಾರ್ಯಕ್ರಮದಡಿ ಬ್ಯಾಂಕ್ ಮೂಲಕ ಸಾಲ ಮತ್ತು ಸಹಾಯಧನ ನೀಡಲಾಗುತ್ತದೆ.<br>• ಸ್ವಯಂ ಉದ್ಯೋಗ ಅಥವಾ ವೇತನಾಧಾರಿತ ಉದ್ಯೋಗ ಕೈಗೊಳ್ಳಲು ಕೌಶಲ್ಯ ತರಬೇತಿಯನ್ನು ನೀಡಲಾಗುವುದು. |

ಕಡತ ಸಂಖ್ಯೆ: ನಅಇ 152 ಎಂಎನ್ಇ 2020(ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು